## ಅರಣ್ಯ ಇಲಾಖೆ

## ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರ ಅರಣ್ಯ ಕಾಮಗಾರಿ ಕೈಗೊಳ್ಳುವುದರ ಬಗ್ಗೆ ಟೆಂಡರ್

## ಸಂಕ್ಷಿಪ್ತ ಟೆಂಡರ್ ಪ್ರಕಟಣೆ

**ಎ2.ಬಿಯುಡಿ–ಉಅಸಂ, ಅಕಾಟೆ–ಸಿಆರ್. 17/ 2008–09. ದಿನಾಂಕ: 20ನೇ ಜುಲೈ 2008**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2008–09 ನೇ ಸಾಲಿಗೆ 2008 ರ ಮಳೆಗಾಲದಲ್ಲಿ ವಿವಿಧ ಯೋಜನೆಗಳಡಿಯಲ್ಲಿ ಈ ಕೆಳಗೆ ನಮೂದಿಸಿರುವ ಕಾಮಗಾರಿ ಕೈಗೊಳ್ಳಲು ನೋಂದಾಯಿತ ಅರಣ್ಯ ಗುತ್ತಿಗೆದಾರರಿಂದ ಟೆಂಡರ್ ಕರೆಯಲಾಗಿದೆ.

ದಿನಾಂಕ **21-08-2008** ಅಪರಾಹ್ನ 3.00 ಗಂಟೆಯೊಳಗೆ ಮೊಹರು ಮಾಡಿದ ಟೆಂಡರ್ ಸಲ್ಲಿಸುವುದು ಅದೇ ದಿನ ಕೆಳಗೆ ಸಹಿ ಮಾಡಿದವರ ಅಥವಾ ಇವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟವರು ಸದರಿ ದಿನಾಂಕದಂದು ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್ ಲಕೋಟೆಯನ್ನು ಅಪರಾಹ್ನ 4.00 ಗಂಟೆಗೆ ತೆಗೆಯಲಾಗುವುದು ಮತ್ತು ಸದರಿ ದಿನಾಂಕದಂದು ಯಾವುದೇ ಟೆಂಡರ್ ಬಾರದಿದ್ದರೆ ಅಥವಾ ಕಾರಣಾಂತರಗಳಿಂದ ಟೆಂಡರ್ ನಡೆಯದೆ ಇದ್ದಲ್ಲಿ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ದಿನಾಂಕ **30-08-2008** ರಂದು ಅಪರಾಹ್ನ 3.00 ಗಂಟೆಗೆ ಎರಡನೇ ಬಾರಿಗೆ ನೋಂದಾಯಿತ ಇಚ್ಛೆಯುಳ್ಳ ಅರಣ್ಯ ಗುತ್ತಿಗೆದಾರರಿಂದ ಭರ್ತಿ ಮಾಡಿದ ಟೆಂಡರ್‌ಗಳನ್ನು ಸ್ವೀಕೃತಿ ಮಾಡಲಾಗುವುದು ಮತ್ತು ಟೆಂಡರ್ ಲಕೋಟೆಯನ್ನು ಅದೇ ದಿನ 4.00 ಗಂಟೆಗೆ ತೆರೆಯಲಾಗುವುದು. ಈ ಬಗ್ಗೆ ಮತ್ತೆ ಪ್ರತ್ಯೇಕ ಪ್ರಕಟಣೆ ಹೊರಡಿಸಲಾಗುವುದಿಲ್ಲ.

**1. 12 ನೇ ಆರ್ಥಿಕ ಆಯೋಗ ಯೋಜನೆಯಡಿಯಲ್ಲಿ ಕೈಗೊಳ್ಳಬೇಕಾದ ಕಾಮಗಾರಿಗಳ ವಿವರ.**

| ಕ್ರ. ಸಂ. | ವಲಯದ ಹೆಸರು | ಸ್ಥಳದ ಹೆಸರು | ಕಾಮಗಾರಿಯ ವಿವರ | ಭೌತಿಕ (ಹೆ.ಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ ಮೊತ್ತ (ರೂ.ಗಳಲ್ಲಿ) | ಕಾಮಗಾರಿ ಪೂರೈಸ ಬೇಕಾದ ದಿನಾಂಕ |
|---|---|---|---|---|---|---|---|
| 1 | ಕನಕಪುರ | ಮಂಜುನಾಥ ಎಸ್.ಎಫ್ | Antipoaching Camps | 1 No. | 1,82,000-00 | 18,200-00 | 31-3-2009 |
| 2 | ಸಾತನೂರು | ಚಿಲಂದವಾಡಿ ಎಸ್.ಎಫ್ | Antipoaching Camps | 1 No. | 1,82,000-00 | 18,200-00 | 31-3-2009 |
| 3 | ಚನ್ನಪಟ್ಟಣ | ಕೆಂಗಲ್ ನರ್ಸರಿ | a) Establishing permanent high way nurseries 1) Construction of Nalabunds, | 1 No. | 1,75,000-00 | 17,500-00 | 31-3-2009 |
| | | | 2) Fencing work, Cleaning, Leveling the Area and Formation of Road | | 2,50,000-00 | 25,000-00 | 31-3-2009 |
| | | | 3) Water Pipeline and other works | | 1,00,000-00 | 10,000-00 | 31-3-2009 |
| | | | 4) Construction of water Tank and other works | | 1,75,000-00 | 17,500-00 | 31-3-2009 |
| 4 | ರಾಮನಗರ | ಯಂಗಯ್ಯನಕೆರೆ ನರ್ಸರಿ | a) Establishing permanent high way nurseries and high way plantations on Bangalore to Mysore highway | 1 No. | 2,50,000-00 | 25,000-00 | 31-3-2009 |

| ಕ್ರ. ಸಂ. | ವಲಯದ ಹೆಸರು | ಸ್ಥಳದ ಹೆಸರು | ಕಾಮಗಾರಿಯ ವಿವರ | ಭೌತಿಕ (ಹೆ.ಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ ಮೊತ್ತ (ರೂ.ಗಳಲ್ಲಿ) | ಕಾಮಗಾರಿ ಪೂರೈಸ ಬೇಕಾದ ದಿನಾಂಕ |
|---|---|---|---|---|---|---|---|
| 5 | | ಹನುಮಂತಪುರ ನರ್ಸರಿ | Formation of New Nursery | | | | |
| | | | 1) Fencing work | | | | 31-3-2009 |
| | | | 2) Cleaning , Leveling the area and formation of Road | | 2,50,000-00 | 25,000-00 | 31-3-2009 |
| | | | 3) Water Pipeline and other works | | | | 31-3-2009 |
| | | | 4) drilling of Borewell | | | | 31-3-2009 |
| | | | 5) Providing for Electricity | | | | 31-3-2009 |
| 6 | ರಾಮನಗರ | ಬಿಡದಿ – ರಾಮನಗರ | Monsoon Road Side Plantation work | 12 Km | 2,58,000-00 | 25,800-00 | 31-3-2009 |
| 7 | ಚನ್ನಪಟ್ಟಣ | ಕೆಂಗಲ್ – ಚನ್ನಪಟ್ಟಣ | Monsoon Road side Plantation work | 13 Km | 2,92,000-00 | 29,200-00 | 31-3-2009 |

**ನಿಬಂಧನೆಗಳು**

1. ಟೆಂಡರ್ ಫಾರಂಗಳನ್ನು ಫಾರಂಗೆ ರೂ. 200–00 ಹಾಗೂ ತೆರಿಗೆ ಪಾವತಿ ಮಾಡಿ ದಿನಾಂಕ **21-8-2008** ಕಛೇರಿ ಕೆಲಸದ ವೇಳೆಯಲ್ಲಿ ಅಪರಾಹ್ನ 1.00 ಗಂಟೆಯವರೆಗೆ ಪಡೆಯಬಹುದು ಮತ್ತು ಟೆಂಡರ್ ನಲ್ಲಿ ಭಾಗವಹಿಸಲು ಇಚ್ಛೆಯುಳ್ಳವರು ಈ ವಿಭಾಗದಲ್ಲಿ 2008–09 ನೇ ಸಾಲಿಗೆ ತಮ್ಮ ಹೆಸರು ಅನ್ನು ಅರಣ್ಯ ಗುತ್ತಿಗೆದಾರರಾಗಿ ನೋಂದಾಯಿಸಿಕೊಳ್ಳಬೇಕು. ತಪ್ಪಿದ್ದಲ್ಲಿ ಅಂತವರ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.
2. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಪ್ರತಿ ಬ್ಲಾಕ್‌ಗೆ ಸಂಬಂಧಿಸಿದಂತೆ ಪ್ರತ್ಯೇಕವಾದ ಮೊಹರು ಲಕೋಟೆಯಲ್ಲಿ ಪ್ರತ್ಯೇಕವಾಗಿ ಇಎಂಡಿಯೊಂದಿಗೆ ಸಲ್ಲಿಸುವುದು.
3. ಭರ್ತಿ ಮಾಡಿದ ಟೆಂಡರ್ ಫಾರಂ ಅನ್ನು **21-08-2008** ರಂದು ಅಪರಾಹ್ನ 3.00 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರ ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು ಮತ್ತು ಮೇಲ್ಕಂಡ ದಿನಾಂಕದಂದು ಯಾವುದೇ ಕಾರಣದಿಂದಾಗಿ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನ: ದಿನಾಂಕ **30-08-2008** ರಂದು ಅಪರಾಹ್ನ 4.00 ಗಂಟೆಗೆ ಟೆಂಡರನ್ನು ತೆರೆಯಲಾಗುವುದು ಈ ಬಗ್ಗೆ ಮತ್ತೆ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.
4. ಈ ಸದರಿ ಕಾಮಗಾರಿಗಳು ಕಾಲಬದ್ಧ ಕೆಲಸಗಳಾಗಿದ್ದು, ಒಂದು ಪಕ್ಷ ಯಾವುದಾದರೂ ಕಾಮಗಾರಿಯನ್ನು ಟೆಂಡರ್ ಮುಂಚೆ ಕೈಗೊಂಡಿದ್ದ ಪಕ್ಷದಲ್ಲಿ ಮತ್ತು ಕೆಲವು ಕೆಲಸಗಳನ್ನು ಕೈಬಿಡಬೇಕಾದ ಸಂದರ್ಭದಲ್ಲಿ ಅಂತಹ ಕೆಲಸಗಳನ್ನು ಈ ಪ್ರಕಟಣೆಯ ಟೆಂಡರಿನಿಂದ ಹೊರತುಪಡಿಸಿ ಉಳಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಟೆಂಡರ್‌ದಾರರಿಗೆ ಕಾಮಗಾರಿ ಕೈಗೊಳ್ಳಲು ಆದೇಶ ನೀಡಲಾಗುವುದು.
5. ಪ್ರತಿ ಟೆಂಡರ್ ದಾರರು ಈ ಕಾಮಗಾರಿಗಳನ್ನು ನೆರೆವೇರಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವ್ಯವಸ್ಥೆಯನ್ನು ಅವರೇ ಸ್ವಂತವಾಗಿ ಮಾಡಿಕೊಳ್ಳಬೇಕು.
6. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಛಿಸುವ ಗುತ್ತಿಗೆದಾರರು ಆಯಾ ಕೆಲಸಕ್ಕೆ ನಿಗಧಿಪಡಿಸಿರುವ ಇಎಂಡಿ ಹಾಗೂ ಭದ್ರತಾ ಠೇವಣಿ ಮೊತ್ತಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರ ಇವರ

ಪರವಾಗಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿಡಿ ರೂಪದಲ್ಲಿ ಟೆಂಡರ್ ಜೊತೆಗೆ ಸಲ್ಲಿಸಬೇಕಾಗುತ್ತದೆ.

7. ಗುತ್ತಿಗೆದಾರರು ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಸಲ್ಲಿಸಿದಲ್ಲಿ ಅಂತಹವನ್ನು ತಿರಸ್ಕರಿಸಲಾಗುವುದು. ಇದರ ಬಗ್ಗೆ ಏನಾದರೂ ತಕರಾರುಗಳು ಉದ್ಭವವಾದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ರಾಮನಗರ ವಿಭಾಗ, ರಾಮನಗರರವರ ತೀರ್ಮಾನವೇ ಅಂತಿಮವಾಗಿರುತ್ತದೆ.
8. ನಿಗದಿಪಡಿಸಿದ ಅವಧಿಯ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
9. ಯಾವುದೇ ಕಾರಣ ನೀಡದೆ ಟೆಂಡರ್‌ಗಳನ್ನು ಒಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರ ರವರು ಕಾಯ್ದಿರಿಸಿಕೊಂಡಿರುತ್ತಾರೆ.
10. ಟೆಂಡರ್‌ನಲ್ಲಿ ಯಶಸ್ವಿಯಾದ ಅರಣ್ಯ ಗುತ್ತಿಗೆದಾರರಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರ ಇವರಿಂದ ತಿಳುವಳಿಕೆ ನೀಡಿದ 7 ದಿವಸಗಳ ಒಳಗಾಗಿ ನಿರ್ಧಿಷ್ಟ ನಮೂನೆಯಲ್ಲಿ ಕರಾರು ನಾಮೆಯನ್ನು ಸಹಿ ಮಾಡತಕ್ಕದ್ದು, ಈ ಅವಧಿಯನ್ನು ವಿಸ್ತರಿಸುವ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರ ಇವರು ಹೊಂದಿರುತ್ತಾರೆ.
11. ಈ ಮೇಲಿನ ಕಾಮಗಾರಿಗಳ ಅನುಷ್ಠಾನ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ವಾರ್ಷಿಕ ಕ್ರಿಯಾಯೋಜನೆಯ ಅನುಮೋದನೆ ನಿಬಂಧನೆಗೆ ಒಳಪಟ್ಟಿರುತ್ತದೆ. ಒಂದು ಪಕ್ಷ ಸರ್ಕಾರದಿಂದ ಹಣ ಬಿಡುಗಡೆ ತಡವಾದ ಪಕ್ಷದಲ್ಲಿ ಅಂತಹ ಹಣ ಪಾವತಿಗಾಗಿ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.
12. ಎಲ್ಲಾ ಕೆಲಸಗಳು ಆಗಿಂದಾಗ್ಗೆ ಮುಕ್ತಾಯವಾದ ನಂತರ ಸದರಿ ಕೆಲಸಗಳನ್ನು ನಿಯಮದಂತೆ ಸಂಬಂಧಿಸಿದ ಅಧಿಕಾರಿಗಳಿಂದ ತನಿಖೆ ಮಾಡಿಸಿ ವಲಯ ಅರಣ್ಯಾಧಿಕಾರಿಗಳ ಮುಖಾಂತರ ಬಿಲ್ಲುಗಳನ್ನು ಅಳತೆ ಪುಸ್ತಕದೊಂದಿಗೆ (ಎಂಬಿ/ಎಫ್.ಎನ್.ಬಿ) ಒಪ್ಪಿಸಬೇಕಾಗುತ್ತದೆ ಮತ್ತು ಬಿಲ್ ಸಂದಾಯ ಮಾಡುವಾಗ ಸದರಿ ಬಿಲ್‌ಗಳಲ್ಲಿ ನಿಯಮದಂತೆ ಚಾಲ್ತಿಯಲ್ಲಿರುವ ಆದಾಯ ತೆರಿಗೆ, ಮಾರಾಟ ತೆರಿಗೆ, ಸರ್‌ಚಾರ್ಜ್ ಮತ್ತು ಭದ್ರತಾ ಠೇವಣಿ ಹಣವನ್ನು ಕಡಿತಗೊಳಿಸಲಾಗುವುದು ಮತ್ತು ಆಗಿಂದಾಗ್ಗೆ ಬದಲಾಗುವ ತೆರಿಗೆಗಳ ವ್ಯತ್ಯಾಸವನ್ನು ಸಹ ನಿಯಮದಂತೆ ಕಡಿತಗೊಳಿಸಲಾಗುವುದು.
13. ಕೆಲಸಗಳನ್ನು ನಿರ್ವಹಿಸುವಾಗ ಇತರೆ ನೆಡುತೋಪುಗಳನ್ನು ಹಾಳು ಮಾಡಿದಲ್ಲಿ ಗಿಡ ಮರಗಳನ್ನು ಕಡಿದು ನಾಶಪಡಿಸಿದಲ್ಲಿ ಸರ್ಕಾರಕ್ಕೆ ಆದ ನಷ್ಟದ ಬಗ್ಗೆ ಸಂಬಂಧಪಟ್ಟ ಗುತ್ತಿಗೆದಾರರ ಮೇಲೆ ಕಾನೂನಿನ ಕ್ರಮ ಜರುಗಿಸಲಾಗುವುದು.
14. ಕೆಲಸಗಳ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.
15. ಯಾವುದೇ ವಿಭಾಗದಲ್ಲಿ ಗುತ್ತಿಗೆದಾರರು ಡಿಫಾಲ್ಟರ್ ಆಗಿದ್ದರೆ ಅಂತಹವರು ಟೆಂಡರ್‌ನಲ್ಲಿ ಭಾಗವಹಿಸಲು ಅರ್ಹರಾಗಿರುವುದಿಲ್ಲ.
16. ಗುತ್ತಿಗೆದಾರರು ನೇಮಿಸಿಕೊಳ್ಳುವ ಕೆಲಸಗಾರರಿಗೆ ಸರ್ಕಾರದ ನಿಯಮದಂತೆ ಮಜೂರಿ ಮತ್ತಿತರ ಅನುಕೂಲಗಳನ್ನು ಸ್ವತ: ಗುತ್ತಿಗೆದಾರರೇ ವಹಿಸಬೇಕು. ಇಲಾಖೆಯು ಗುತ್ತಿಗೆದಾರರ ಮತ್ತು ಅವರ ನೌಕರರಿಗೆ ಯಾವುದೇ ಆದ ನಷ್ಟ ಇತ್ಯಾದಿಗಳಿಗೆ ಜವಾಬ್ದಾರರಲ್ಲ.
17. ಟೆಂಡರ್‌ನಲ್ಲಿ ನಮೂದಿಸಿದ ಹಣವು ಅಂದಾಜು ಪಟ್ಟಿಗಳ ಅಂದಾಜು ದರವಾಗಿರುತ್ತದೆ. (ಅಪ್ರಾಕ್ಸಿಮೇಟ್) ಹಣವನ್ನು ಪಾವತಿಸುವಾಗ ಮಂಜೂರಾದ ಅಂದಾಜು ಪಟ್ಟಿಯಂತೆ ಹಣ ಪಾವತಿಸಲಾಗುವುದು.
18. ಕಾಮಗಾರಿಯನ್ನು ಅರಣ್ಯ ಇಲಾಖೆಯಿಂದ ಪರಿಶೀಲಿಸಿ ಮಂಜೂರಾದ ಅಂದಾಜು ಪಟ್ಟಿಯ ಅನುಗುಣವಾಗಿ ಮಾಡಬೇಕಾಗಿರುತ್ತದೆ. ಕಾಮಗಾರಿಯ ಗುಣಮಟ್ಟವು ವಲಯ ಅರಣ್ಯಾಧಿಕಾರಿ, ಸಹಾಯಕ ಅರಣ್ಯಾಧಿಕಾರಿಗಳು ಇವರು ಕಾಲಕಾಲಕ್ಕೆ ನೀಡುವ ಲಿಖಿತ/ಮೌಖಿಕ ಆದೇಶಕ್ಕನುಗುಣವಾಗಿ ಇರತಕ್ಕದ್ದು. ಕೆಲಸಗಳಲ್ಲಿ ಏನಾದರೂ ಪರಿವರ್ತನೆ ಅಥವಾ ಮಾರ್ಪಾಡು ಮಾಡುವುದು ಅವಶ್ಯವೆಂದು ಕಂಡುಬಂದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಲಿಖಿತ ಆದೇಶದ ಮೇರೆಗೆ ಅಂತಹ ಪರಿವರ್ತನೆ ಅಥವಾ ಮಾರ್ಪಾಡುಗಳನ್ನು ಮಂಜೂರಾದ ದರದಲ್ಲಿಯೇ ಮಾಡಲು ಗುತ್ತಿಗೆದಾರರು ಬದ್ದರಾಗಿರಬೇಕಾಗಿರುತ್ತದೆ.

19. ವಲಯ ಅರಣ್ಯಧಿಕಾರಿ ಮತ್ತು ಸಹಾಯಕ ಅರಣ್ಯ ಸಂರಕ್ಷಣಾಕಾರಿಗಳ ನಿರ್ದೇಶನದಂತೆ ಕಾಮಗಾರಿಗಳನ್ನು ಪೂರ್ಣಗೊಳಿಸತಕ್ಕದ್ದು ಗುತ್ತಿಗೆಯ ಅವಧಿಯನ್ನು ಸಾಮಾನ್ಯವಾಗಿ ವಿಸ್ತರಿಸಲಾಗುವುದಿಲ್ಲ. ನಿಗಧಿತ ಅವಧಿಯಲ್ಲಿ ಕಾಮಗಾರಿಗಳನ್ನು ಪೂರ್ಣಗೊಳಿಸತಕ್ಕದ್ದು ಅತಿ ವಿಶೇಷ ಸಂದರ್ಭಗಳು ಬಂದಲ್ಲಿ ವಿಸ್ತರಣಾ ಅವಧಿಯಲ್ಲಿ ಮಾಡಿದ ಕೆಲಸಗಳಿಗೆ ಗುತ್ತಿಗೆ ದರಗಳಲ್ಲಿ ಶೇ. 5 ರಂತೆ ಕಡಿತದೊಂದಿಗೆ ಅವಧಿಯನ್ನು ವಿಸ್ತರಿಸುವ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಹೊಂದಿರುತ್ತಾರೆ. ವಲಯ ಅರಣ್ಯ ಅಧಿಕಾರಿ ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿರವರು ನೀಡಿದ ನಿರ್ಧೇಶನದಂತೆ ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸದಿದ್ದಲ್ಲಿ ಅಂತಹ ಕಾಮಗಾರಿಗಳಿಗೆ ಹಣವನ್ನು ಪಾವತಿಸಲಾಗುವುದಿಲ್ಲ ಮತ್ತು ಇಎಂಡಿ ಹಾಗೂ ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

20. ಟೆಂಡರ್‌ನ್ನು ಕಂಪನಿಯ ವತಿಯಿಂದ / ಸಂಘ ಸಂಸ್ಥೆಗಳು ಕೊಡುವ ಪಕ್ಷದಲ್ಲಿ

    ಅ) ಕಂಪನಿಯ/ ಸಂಘ ಸಂಸ್ಥೆಗಳ ನೋಂದಾಯಿತ ಸಂಸ್ಥೆಗಳಾಗಿರಬೇಕು.

    ಆ) ಕಂಪನಿಯ ಎಲ್ಲಾ ಪಾಲುದಾರರಿಗೆ ಟೆಂಡರ್‌ನ್ನು ಸಹಿ ಮಾಡಲು ಸಾಧ್ಯವಾಗದಿದ್ದಲ್ಲಿ ಟೆಂಡರ್ ಸಹಿ ಮಾಡುವ ವ್ಯಕ್ತಿಯು ಈ ಬಗ್ಗೆ ಅಧಿಕಾರ ಪತ್ರ (Power of Attorney) ಪಡೆದುಕೊಂಡಿರಬೇಕು. ಇಂತಹ ಪತ್ರವನ್ನು ಟೆಂಡರ್‌ಗೆ ಲಗತ್ತಿಸಬೇಕು.

21. ಅರಣ್ಯ ಕೂಲಿಕಾರರ ಸಹಕಾರ ಸಂಘಗಳು ಈ ಕೆಲಸಗಳಿಗೆ ಟೆಂಡರ್ ಕೊಡಲು ಇಚ್ಛಿಸಿದಲ್ಲಿ ಇಎಂಡಿ ಮತ್ತು ಭದ್ರತಾ ಠೇವಣಿಯನ್ನು ಕಡ್ಡಾಯವಾಗಿ ನೀಡಬೇಕಾಗುವುದು ಹಾಗೂ ಸಂಘಗಳ ನೋಂದಣಿ ನಿಯಮದಂತೆ ಸಂಘಗಳೂ ಕಡ್ಡಾಯವಾಗಿ ನೊಂದಣಿಯಾಗಿರಬೇಕು. ಇಲ್ಲವಾದಲ್ಲಿ ಟೆಂಡರ್‌ನ್ನು ತಿರಸ್ಕರಿಸಲಾಗುವುದು.

22. ಯಶಸ್ವಿ ಟೆಂಡರ್‌ದಾರರು ಕರಾರು ನಾಮೆಯನ್ನು ಸಹಿ ಮಾಡಿದ ನಂತರ ಟೆಂಡರನ್ನು ಹಿಂತೆಗೆದುಕೊಂಡಲ್ಲಿ ನಿಗಧಿತ ಸಮಯದಲ್ಲಿ ಕಾಮಗಾರಿ ಪ್ರಾರಂಭಿಸದಿದ್ದಲ್ಲಿ, ಕಾಮಗಾರಿಯ ಬಗ್ಗೆ ನಿರಾಸಕ್ತಿ ಹೊಂದಿದಲ್ಲಿ ಟೆಂಡರ್‌ದಾರರ ಇಎಂಡಿ ಮತ್ತು ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೇ ಗುತ್ತಿಗೆ ಕೆಲಸವನ್ನು ಮೂಲ ಗುತ್ತಿಗೆದಾರರ ಖರ್ಚು ಮತ್ತು ಜವಾಬ್ದಾರಿಯ ಮೇಲೆ ಮರು ಟೆಂಡರ್ ಮಾಡಲಾಗುವುದು. ಟೆಂಡರ್‌ಗೆ ಕಾಲಾವಕಾಶ ಇಲ್ಲದಿದ್ದಲ್ಲಿ ಇಲಾಖೆಯಿಂದ ಕಾಮಗಾರಿಯನ್ನು ಪೂರ್ಣಗೊಳಿಸಿ ಸರ್ಕಾರಕ್ಕೆ ಹಾನಿಯಾದ ಮೊತ್ತವನ್ನು ಕರ್ನಾಟಕ ಅರಣ್ಯ ಸಂಹಿತೆ 1963 ಕಾಲಂ 109 ಮತ್ತು 119 ರಂತೆ ಭೂಕಂದಾಯ ಬಾಕಿ ವಸೂಲಿಯಂತೆ ವಸೂಲು ಮಾಡಲಾಗುವುದು.

23. ಯಶಸ್ವಿ ಬಿಡ್ಡುದಾರರು ಕಾಮಗಾರಿಗಳನ್ನು ಪೂರ್ಣಗೊಳಿಸಿದ ನಂತರ ಹಣ ಪಾವತಿಸುವಾಗ ಬಿಲ್ಲಿನ ಮೊತ್ತದ ಶೇಕಡ 5 ರಷ್ಟು ಮೊತ್ತವನ್ನು ಭದ್ರತಾ ಠೇವಣಿಯಾಗಿ ಹಿಡಿಯಲಾಗುವುದು. ಈ ಹಣವನ್ನು ನೆಡುತೋಪು ನಿರ್ಮಾಣ ಬಗ್ಗೆ ವಲಯ ಅರಣ್ಯಾಧಿಕಾರಿಗಳು ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ಧೃಡೀಕರಣ ಪತ್ರ ನೀಡಿದ ನಂತರ ಭದ್ರತಾ ಠೇವಣಿ ಮೊತ್ತವನ್ನು ಹಿಂದಿರುಗಿಸಲಾಗುವುದು.

24. ಕೆಲಸ ಪೂರ್ಣಗೊಂಡ ದಿನಾಂಕ 1 ವರ್ಷದ ಒಳಗಾಗಿ ಕಾಮಗಾರಿಯಲ್ಲಿ ಯಾವುದೇ ದೋಷ ಕಂಡುಬಂದಲ್ಲಿ ಗುತ್ತಿಗೆದಾರರು ತಮ್ಮ ಸ್ವಂತ ಖರ್ಚಿನಲ್ಲಿ ದೋಷ ಪರಿಹರಿಸಬೇಕಾಗುತ್ತದೆ. ನಂತರ ಭದ್ರತಾ ಠೇವಣಿ ಹಿಂತಿರುಗಿಸಲಾಗುವುದು. ತಪ್ಪಿದಲ್ಲಿ ಭದ್ರತಾ ಠೇವಣಿಯಲ್ಲಿ ಸದರಿ ಖರ್ಚನ್ನು ಭರಿಸಲಾಗುವುದು.

25. ಗುತ್ತಿಗೆದಾರರು ನೇಮಿಸಿಕೊಂಡಿರುವ ಕೂಲಿ ಕಾರ್ಮಿಕರಿಗೆ ಅಪಘಾತ/ ಇನ್ನಿತರ ಹಾನಿಗಳು ಸಂಭವಿಸಿದಲ್ಲಿ ನಷ್ಟ ಪರಿಹಾರವನ್ನು ಗುತ್ತಿಗೆದಾರರೇ ನೀಡಬೇಕಾಗುತ್ತದೆ.

26. ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಲಿಖಿತ ಅನುಮತಿ ಇಲ್ಲದೇ ಯಾವುದೇ ಕೆಲಸವನ್ನು ಟೆಂಡರುದಾರರು ಪ್ರಾರಂಭಿಸಬಾರದು.

27. ಟೆಂಡರ್ ಫಾರಂ ನೀಡುವ ದಿನಗಳಲ್ಲಿ ಗುತ್ತಿಗೆದಾರರ ನೋಂದಣಿಯನ್ನು ಮಾಡಲಾಗುವುದಿಲ್ಲ.

28. ಕಾಲ ಕಾಲಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ ಇವರು ವಿಧಿಸುವ ಷರತ್ತಿಗೆ ಗುತ್ತಿಗೆದಾರರು ಬದ್ದರಾಗಿರಬೇಕು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ.

ಪಿ.ಆರ್. 433

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ದಾವಣಗೆರೆ ವಿಭಾಗ, ದಾವಣಗೆರೆ ಇವರ ಕಾರ್ಯಾಲಯ ವಿವರವಾದ ಟೆಂಡರ್ ಪ್ರಕಟಣೆ**

**ಸಂ: ಬಿ1/ಬಿಯುಡಿ/ಟೆಂಡರ್/ಸಿಆರ್–25/08–09, ದಿನಾಂಕ: 5ನೇ ಆಗಸ್ಟ್ 2008.**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2008–09 ನೇ ಸಾಲಿನಲ್ಲಿ ದಾವಣಗೆರೆ ವಿಭಾಗದಲ್ಲಿ ಈ ಕೆಳಗೆ ಕಾಣಿಸಿದ ಷೆಡ್ಯೂಲ್‌ನಲ್ಲಿ ನಮೂದಿಸಿದಂತೆ ನೆಡುತೋಪು ಬೆಳೆಸುವುದು ಹಾಗೂ ಮುಂಗಡ ಕಾಮಗಾರಿಗಳಾದ ಗುಂಡಿಗಳನ್ನು ತೆಗೆಯುವುದು. ಜಾನುವಾರು ನಿರೋಧಕ ಕಂದಕವನ್ನು ತೆಗೆಯಲು, ರಿಪ್ಪಿಂಗ್ ಕಾಮಗಾರಿಗಳನ್ನು ನಿರ್ವಹಿಸಲು ಹಾಗೂ ಸಸಿಗಳನ್ನು ಬೆಳೆಸಲು 2008–09 ನೇ ಸಾಲಿಗೆ ಈ ವಿಭಾಗದಲ್ಲಿ ನೊಂದಾಯಿತರಾದ ಅರಣ್ಯ ಗುತ್ತಿಗೆದಾರರಿಂದ ನಿಗಧಿತ ನಮೂನೆಯಲ್ಲಿ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಇಚ್ಛೆಯುಳ್ಳವರು ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟಂತೆ ಟೆಂಡರ್‌ನಲ್ಲಿ ಭಾಗವಹಿಸಬಹುದಾಗಿದೆ.

**ಷೆಡ್ಯೂಲ್ – 1**

| | | | |
|---|---|---|---|
| 1 | ಟೆಂಡರ್ ಜರುಗುವ ಸ್ಥಳ | : | ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಲೋಕಿಕೆರೆ ರಸ್ತೆ, ಟಿ.ವಿ.ಸ್ಟೇಶನ್ ಹತ್ತಿರ, ದಾವಣಗೆರೆ. |
| 2 | ಟೆಂಡರ್ ಫಾರಂಗಳನ್ನು ನೀಡುವ ದಿನಾಂಕ | : | ದಿನಾಂಕ: 28–8–2008 ರಂದು ಬೆಳಿಗ್ಗೆ 10–00 ಗಂಟೆಯಿಂದ ಮಧ್ಯಾಹ್ನ 1–00 ಗಂಟೆಯವರಿಗೆ |
| 3 | ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ ಮತ್ತು ಸಮಯ | : | ದಿನಾಂಕ: 28–8–2008 ರಂದು ಮಧ್ಯಾಹ್ನ 4–30 ಗಂಟೆಯವರಿಗೆ |
| 4 | ಟೆಂಡರ್‌ಗಳನ್ನು ತೆರೆಯುವ ಸಮಯ | : | ದಿನಾಂಕ: 28–8–2008 ರಂದು ಮಧ್ಯಾಹ್ನ 4–45 ಗಂಟೆಗೆ |
| 5 | ಟೆಂಡರ್ ಫಾರಂ ದರ | : | ರೂ. 225/– |
| 6 | ಅರಣ್ಯ ಗುತ್ತಿಗೆದಾರನಾಗಿ ನೊಂದಣಿ ಮಾಡಿಸಲು ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕ: | | ದಿನಾಂಕ: 27–8–2008. |

**ಷೆಡ್ಯೂಲ್ – 2**

**ಯುನಿಟ್ – 1**

| ಕ್ರ. ಸಂ. | ಯೋಜನೆ | ವಿಸ್ತೀರ್ಣ | ಕಾಮಗಾರಿಗಳ ವಿವರ | ಅಂದಾಜು ಮೊತ್ತ ರೂ.ಗಳಲ್ಲಿ | EMD ರೂ.ಗಳಲ್ಲಿ |
|---|---|---|---|---|---|
| 1 | 2 | 3 | 4 | 5 | 6 |
| | ದಾವಣಗೆರೆ ವಲಯ | | | | |
| 1 | ಕೆ.ಎಸ್.ಎಫ್.ಎಂ.ಬಿ.ಸಿ. ಮಾದರಿ–01 | 1. 50 ಹೆ. | ಜಾನುವಾರು ನಿರೋಧಕ ಕಂದಕ ತೆಗೆಯುವುದು. – 4500 ಸಿಎಂಟಿಆರ್ | 227565.00 | |
| | | | ಭೂ ಮತ್ತು ಜಲ ಸಂರಕ್ಷಣಾ ಕಾಮಗಾರಿ | 77500.00 | |
| | | 2. 30 ಹೆ. | ಮೂರನೇ ವರ್ಷದ ನೆಡುತೋಪು ಪೋಷಣೆ | 3780.00 | |
| | | 3. 50 ಹೆ. | ಎರಡನೇ ವರ್ಷದ ನೆಡುತೋಪು ಪೋಷಣೆ | 6300.00 | |
| | | 4. 50 ಹೆ. | ಒಂದನೇ ವರ್ಷದ ನೆಡುತೋಪು ಪೋಷಣೆ | 45300.00 | |
| 2 | ಕೆ.ಎಸ್.ಎಫ್.ಎಂ.ಬಿ.ಸಿ. ಮಾದರಿ–02 | 150 ಹೆ. | 1. ನೆಡುತೋಪು ಬೆಳೆಸುವುದು | 173200.00 | |
| | | 150 ಹೆ. | 1. ಜಾನುವಾರು ನಿರೋಧಕ ಕಂದಕ ತೆಗೆಯುವುದು 13500 – ಸಿಎಂಟಿಆರ್ | 682695.00 | |
| | | | 2. ಗುಂಡಿಗಳನ್ನು ತೆಗೆಯುವುದು 0.60x0.60x0.60 ಗಾತ್ರದ 60000 ಗುಂಡಿಗಳು 12960 ಸಿಎಂಟಿಆರ್ | 655387.00 | |
| | | | 3. 8"x12" ಗಾತ್ರದ 72000 ಸಾವಿರ ಸಸಿಗಳನ್ನು ಬೆಳೆಸುವುದು. | 482400.00 | |
| | | | 4. ಭೂ ಮತ್ತು ಜಲ ಸಂರಕ್ಷಣಾ ಕಾಮಗಾರಿ | 478500.00 | |
| | | 25 ಹೆ. | 5. ಒಂದನೇ ವರ್ಷದ ನೆಡುತೋಪು ಪೋಷಣೆ | 33900.00 | |

| ಕ್ರ. ಸಂ. | ಯೋಜನೆ | ವಿಸ್ತೀರ್ಣ | ಕಾಮಗಾರಿಗಳ ವಿವರ | ಅಂದಾಜು ಮೊತ್ತ ರೂ.ಗಳಲ್ಲಿ | EMD ರೂ.ಗಳಲ್ಲಿ |
|---|---|---|---|---|---|
| 3 | ಕೆ.ಎಸ್.ಎಫ್.ಎಂ.ಬಿ.ಸಿ. ಮಾದರಿ–04 | 55 ಹೆ. | 1. ನೆಡುತೋಪು ಬೆಳೆಸುವುದು | 169427.00 | |
| | | 25 ಹೆ. | 1. ಮುಂಗಡ ಕಾಮಗಾರಿಯಲ್ಲಿ ಜಾನುವಾರು ನಿರೋಧಕ ಕಂದಕ ತೆಗೆಯುವುದು –2250 ಸಿಎಂಟಿಆರ್ | 113782.00 | |
| | | | 2. ಗುಂಡಿಗಳನ್ನು ತೆಗೆಯುವುದು 0.60x0.60x0.60 ಗಾತ್ರದ 2500 ಗುಂಡಿಗಳು 540 ಸಿಎಂಟಿಆರ್ | 27308.00 | |
| | | | 3. ರಿಪ್ಪಿಂಗ್ ಕೆಲಸ 53750 ಆರ್.ಎಂ.ಟಿ.ಆರ್ | 177850.00 | |
| | | | 4. 8x12 ಗಾತ್ರದ 3000 ಸಾವಿರ ಸಸಿಗಳನ್ನು ಬೆಳೆಸುವುದು. | 20100.00 | |
| | | | 5. 5x8 ಗಾತ್ರದ 45000 ಸಾವಿರ ಸಸಿಗಳನ್ನು ಬೆಳೆಸುವುದು. | 90000.00 | |
| | | | 6. ಭೂ ಮತ್ತು ಜಲ ಸಂರಕ್ಷಣಾ ಕಾಮಗಾರಿ | 122500.00 | |
| | | 25 ಹೆ. | 7. ಒಂದನೇ ವರ್ಷದ ನೆಡುತೋಪು ಪೋಷಣೆ | 65800.00 | |
| 4 | ಕೆ.ಎಸ್.ಎಫ್.ಎಂ.ಬಿ.ಸಿ. ಮಾದರಿ–05 | 50 ಹೆ. | 1. ಮುಂಗಡ ಕೆಲಸದಲ್ಲಿ ಜಾನುವಾರು ನಿರೋಧಕ ಕಂದಕ ತೆಗೆಯುವುದು – 3600 ಸಿ.ಎಂ.ಟಿ.ಆರ್ | 182052.00 | |
| | | | 2. ಗುಂಡಿಗಳನ್ನು ತೆಗೆಯುವುದು 1.00x1.00x1.00ಸಿ.ಎಂ.ಟಿ.ಆರ್. 5000 ಗುಂಡಿಗಳು | 252850.00 | |
| | | | 3. 14x20 ಗಾತ್ರದ 5500 ಸಸಿಗಳನ್ನು ಬೆಳೆಸುವುದು. | 126500.00 | |
| | | | 4. ಭೂ ಮತ್ತು ಜಲ ಸಂರಕ್ಷಣಾ ಕಾಮಗಾರಿ | 207500.00 | |
| 5 | 12 ನೇ ಹಣಕಾಸು | 15 ಹೆ. | 1. ಎರಡನೇ ವರ್ಷದ ನೆಡುತೋಪು ಪೋಷಣೆ | 39100.00 | |
| 6 | ಡಿ.ಡಿ.ಎಫ್. | 17 ಹೆ. | 1. ಮೂರನೇ ವರ್ಷದ ನೆಡುತೋಪು ಪೋಷಣೆ | 33300.00 | |
| | | 15 ಹೆ. | 2. ಎರಡನೇ ವರ್ಷದ ನೆಡುತೋಪು ಪೋಷಣೆ | 29400.00 | |
| | ಒಟ್ಟು | | | **4523996.00** | 90500.00 |

**ಯುನಿಟ್ – 2**

| ಕ್ರ. ಸಂ. | ಯೋಜನೆ | ವಿಸ್ತೀರ್ಣ | ಕಾಮಗಾರಿಗಳ ವಿವರ | ಅಂದಾಜು ಮೊತ್ತ ರೂ.ಗಳಲ್ಲಿ | EMD ರೂ.ಗಳಲ್ಲಿ |
|---|---|---|---|---|---|
| **1** | **2** | **3** | **4** | **5** | **6** |
| | **ಜಗಳೂರು ವಲಯ** | | | | |
| 1 | ಕೆ.ಎಸ್.ಎಫ್.ಎಂ.ಬಿ.ಸಿ. ಮಾದರಿ–01 | 75 ಹೆ. | 1. ಜಾನುವಾರು ನಿರೋಧಕ ಕಂದಕ ತೆಗೆಯುವುದು. 6750 ಸಿಎಂಟಿಆರ್ | 341347.00 | |
| | | | 2. ಭೂ ಮತ್ತು ಜಲ ಸಂರಕ್ಷಣಾ ಕಾಮಗಾರಿ | 116250.00 | |
| | | 150 ಹೆ. | 3. ಮೂರನೇ ವರ್ಷದ ನೆಡುತೋಪು ಪೋಷಣೆ | 19000.00 | |
| | | 25 ಹೆ. | 4. ಎರಡನೇ ವರ್ಷದ ನೆಡುತೋಪು ಪೋಷಣೆ | 3200.00 | |
| | | 80 ಹೆ. | 5. ಒಂದನೇ ವರ್ಷದ ನೆಡುತೋಪು ಪೋಷಣೆ | 72480.00 | |
| 2 | ಕೆ.ಎಸ್.ಎಫ್.ಎಂ.ಬಿ.ಸಿ. ಮಾದರಿ–02 | 225 ಹೆ. | 1. ನೆಡುತೋಪು ಬೆಳೆಸುವುದು | 259776.00 | |
| | | 150 ಹೆ. | 1. ಮುಂಗಡ ಕೆಲಸದಲ್ಲಿ ಜಾನುವಾರು ನಿರೋಧಕ ಕಂದಕ ತೆಗೆಯುವುದು 13500 ಸಿಎಂಟಿಆರ್ | 682595.00 | |
| | | | 2. ಗುಂಡಿಗಳನ್ನು ತೆಗೆಯುವುದು 0.60x0.60x0.60 ಅಳತೆಯ.60000 ಗುಂಡಿಗಳು 12900 ಸಿಎಂಟಿಆರ್ | 655387.00 | |
| | | | 3. 8x12 ಗಾತ್ರದ 72000 ಸಾವಿರ ಸಸಿಗಳನ್ನು ಬೆಳೆಸುವುದು. | 482400.00 | |
| | | | 4. ಭೂ ಮತ್ತು ಜಲ ಸಂರಕ್ಷಣಾ ಕಾಮಗಾರಿ | 478500.00 | |
| | | 50 ಹೆ. | 5. ಒಂದನೇ ವರ್ಷದ ನೆಡುತೋಪು ಪೋಷಣೆ | 67800.00 | |

| ಕ್ರ. ಸಂ. | ಯೋಜನೆ | ವಿಸ್ತೀರ್ಣ | ಕಾಮಗಾರಿಗಳ ವಿವರ | ಅಂದಾಜು ಮೊತ್ತ ರೂ.ಗಳಲ್ಲಿ | EMD ರೂ.ಗಳಲ್ಲಿ |
|---|---|---|---|---|---|
| 3. | ಕೆ.ಎಸ್.ಎಫ್.ಎಂ.ಬಿ.ಸಿ. ಮಾದರಿ–04 | 75 ಹೆ. | 1. ನೆಡುತೋಪು ಬೆಳೆಸುವುದು | 231037.00 | |
| | | 25 ಹೆ. | 1. ಮುಂಗಡ ಕೆಲಸದಲ್ಲಿ ಜಾನುವಾರು ನಿರೋಧಕ ಕಂದಕ ತೆಗೆಯುವುದು 2250 ಆರ್.ಎಂ.ಟಿ.ಆರ್ | 113782.00 | |
| | | | 2. ಗುಂಡಿಗಳನ್ನು ತೆಗೆಯುವುದು 0.60x0.60x0.60 ಗಾತ್ರದ 2500 ಗುಂಡಿಗಳು | 27308.00 | |
| | | | 3. ರಿಪ್ಪಿಂಗ್ ಕೆಲಸ – 53750 ಆರ್.ಎಂ.ಟಿ.ಆರ್ | 177850.00 | |
| | | | 4. 8x12 ಗಾತ್ರದ 3000 ಸಾವಿರ ಸಸಿಗಳನ್ನು ಬೆಳೆಸುವುದು. | 20100.00 | |
| | | | 5. 5x8 ಗಾತ್ರದ 45000 ಸಾವಿರ ಸಸಿಗಳನ್ನು ಬೆಳೆಸುವುದು. | 90000.00 | |
| | | | 6. ಭೂ ಮತ್ತು ಜಲ ಸಂರಕ್ಷಣಾ ಕಾಮಗಾರಿ. | 122500.00 | |
| | | 124 ಹೆ. | 7. ಒಂದನೇ ವರ್ಷದ ನೆಡುತೋಪು ಪೋಷಣೆ | 326288.00 | |
| 4. | ಕೆ.ಎಸ್.ಎಫ್.ಎಂ.ಬಿ.ಸಿ. ಮಾದರಿ–05 | 75 ಹೆ. | 1. ನೆಡುತೋಪು ಬೆಳೆಸುವುದು | 290697.00 | |
| | | 50 ಹೆ. | 1. ಮುಂಗಡ ಕೆಲಸ ಜಾನುವಾರು ನಿರೋಧಕ ಕಂದಕ ತೆಗೆಯುವುದು 3600 ಆರ್.ಎಂ.ಟಿ.ಆರ್. | 182052.00 | |
| | | | 2. ಗುಂಡಿಗಳನ್ನು ತೆಗೆಯುವುದು 1.00x1.00x1.00 =1 ಸಿಎಂಟಿಆರ್ 5000 ಗುಂಡಿಗಳು | 252850.00 | |
| | | | 3. 14x20 ಗಾತ್ರದ 5500 ಸಸಿಗಳನ್ನು ಬೆಳೆಸುವುದು. | 126500.00 | |
| | | | 4. ಭೂ ಮತ್ತು ಜಲ ಸಂರಕ್ಷಣಾ ಕಾಮಗಾರಿ | 207500.00 | |
| | | 100 ಹೆ. | 5. ಒಂದನೇ ವರ್ಷದ ನೆಡುತೋಪು ಪೋಷಣೆ | 331200.00 | |
| 5 | ಪರಿಹಾರಾತ್ಮಕ ಹಸಿರೀಕರಣ | 50 ಹೆ. | 1. ನೆಡುತೋಪು ಬೆಳೆಸುವುದು. | 119222.00 | |
| | | 32 ಹೆ. | 2. ಒಂದನೇ ವರ್ಷದ ನೆಡುತೋಪು ಪೋಷಣೆ | 102300.00 | |
| 6 | 12 ನೇ ಹಣಕಾಸು | 20 ಹೆ. | 1. ಎರಡನೇ ವರ್ಷದ ನೆಡುತೋಪು ಪೋಷಣೆ | 52100.00 | |
| | | 10 ಹೆ: | 2. ಒಂದನೇ ವರ್ಷದ ನೆಡುತೋಪು ಪೋಷಣೆ | 42200.00 | |
| 7 | ಪರಿಹಾರಾತ್ಮಕ ನೆಡುತೋಪು | 19.94 ಹೆ. | 1. ಒಂದನೇ ವರ್ಷದ ನೆಡುತೋಪು ಪೋಷಣೆ | 37500.00 | |
| 8 | TBO's | 60 ಹೆ. | 1. ಒಂದನೇ ವರ್ಷದ ನೆಡುತೋಪು ಪೋಷಣೆ | 90000.00 | |
| 9 | ಡಿ.ಡಿ ಎಫ್ | 18.5 ಹೆ | 1. ಮೂರನೇ ವರ್ಷದ ನೆಡುತೋಪು ಪೋಷಣೆ | 36200.00 | |
| | | 19 ಹೆ | 2.ಒಂದನೇ ವರ್ಷದ ನೆಡುತೋಪು ಪೋಷಣೆ | 39500.00 | |
| | | | **ಒಟ್ಟು** | **6197421.00** | **124000.00** |

**ಯುನಿಟ್ – 3**

| ಕ್ರ. ಸಂ. | ಯೋಜನೆ | ವಿಸ್ತೀರ್ಣ | ಕಾಮಗಾರಿಗಳ ವಿವರ | ಅಂದಾಜು ಮೊತ್ತ ರೂ.ಗಳಲ್ಲಿ | EMD ರೂ.ಗಳಲ್ಲಿ |
|---|---|---|---|---|---|
| 1 | 2 | 3 | 4 | 5 | 6 |
| | **ಹರಪನಹಳ್ಳಿ ವಲಯ** | | | | |
| 1 | ಕೆ.ಎಸ್.ಎಫ್.ಎಂ.ಬಿ.ಸಿ. ಮಾದರಿ–01 | 75 ಹೆ. | 1. ಜಾನುವಾರು ನಿರೋಧಕ ಕಂದಕ ತೆಗೆಯುವುದು. –6750 ಸಿಎಂಟಿಆರ್ | 341347.00 | |
| | | | 2. ಭೂ ಮತ್ತು ಜಲ ಸಂರಕ್ಷಣಾ ಕಾಮಗಾರಿ | 116250.00 | |
| | | 50 ಹೆ. | 3. ಮೂರನೇ ವರ್ಷದ ನೆಡುತೋಪು ಪೋಷಣೆ | 6300.00 | |
| | | 50 ಹೆ. | 4. ಎರಡನೇ ವರ್ಷದ ನೆಡುತೋಪು ಪೋಷಣೆ | 6300.00 | |
| | | 90 ಹೆ. | 5. ಒಂದನೇ ವರ್ಷದ ನೆಡುತೋಪು ಪೋಷಣೆ | 81500.00 | |

| ಕ್ರ ಸಂ. | ಯೋಜನೆ | ವಿಸ್ತೀರ್ಣ | ಕಾಮಗಾರಿಗಳ ವಿವರ | ಅಂದಾಜು ಮೊತ್ತ ರೂ.ಗಳಲ್ಲಿ | EMD ರೂ.ಗಳಲ್ಲಿ |
|---|---|---|---|---|---|
| 2 | ಕೆ.ಎಸ್.ಎಫ್.ಎಂ.ಬಿ.ಸಿ. ಮಾದರಿ–02 | 125 ಹೆ. | 1. ನೆಡುತೋಪು ಬೆಳೆಸುವುದು | 144320.00 | |
| | | 148 ಹೆ. | 1. ಮುಂಗಡ ಕಾಮಗಾರಿಗಳಲ್ಲಿ ಜಾನುವಾರು ನಿರೋಧಕ ಕಂದಕ ತೆಗೆಯುವುದು 13320 ಸಿಎಂಟಿಆರ್ | 673592.00 | |
| | | | 2.ಗುಂಡಿಗಳನ್ನು ತೆಗೆಯುವುದು 0.60x0.60x0.60 ಅಳತೆಯ59200ಗುಂಡಿಗಳು12787.20ಸಿ.ಎಂ.ಟಿ.ಆರ್ | 646648.00 | |
| | | | 3.8x12 ಗಾತ್ರದ 71040 ಸಾವಿರ ಸಸಿಗಳನ್ನು ಬೆಳೆಸುವುದು | 475968.00 | |
| | | | 4.ಭೂ ಮತ್ತು ಜಲ ಸಂರಕ್ಷಣಾ ಕಾಮಗಾರಿ | 472120.00 | |
| | | 25 ಹೆ. | 5. ಒಂದನೇ ವರ್ಷದ ನೆಡುತೋಪು ಪೋಷಣೆ | 33900.00 | |
| 3. | ಕೆ.ಎಸ್.ಎಫ್.ಎಂ.ಬಿ.ಸಿ. ಮಾದರಿ–04 | 75 ಹೆ. | 1. ನೆಡುತೋಪು ಬೆಳೆಸುವುದು | 231037.00 | |
| | | 125 ಹೆ. | 2. ಮುಂಗಡ ಕೆಲಸಗಳಲ್ಲಿ ಜಾನುವಾರು ನಿರೋಧಕ ಕಂದಕ ತೆಗೆಯುವುದು 11250 ಸಿಎಂಟಿಆರ್ | 568912.00 | |
| | | | 3. ಗುಂಡಿಗಳನ್ನು ತೆಗೆಯುವುದು 0.60x0.60x0.60 ಗಾತ್ರದ12500 ಗುಂಡಿಗಳು 2700 ಸಿ.ಎಂ.ಟಿ.ಆರ್. | 136539.00 | |
| | | | 4. ರಿಪ್ಪಿಂಗ್ ಕೆಲಸ 268750 ಆರ್.ಎಂ.ಟಿ.ಆರ್. | 889250.00 | |
| | | | 5. 8x12 ಗಾತ್ರದ 15000 ಸಸಿಗಳನ್ನು ಬೆಳೆಸುವುದು | 100500.00 | |
| | | | 6. 5x8 ಗಾತ್ರದ 225000 ಸಸಿಗಳನ್ನು ಬೆಳೆಸುವುದು | 450000.00 | |
| | | | 7. ಭೂ ಮತ್ತು ಜಲ ಸಂರಕ್ಷಣಾ ಕಾಮಗಾರಿ | 612500.00 | |
| | | 120 ಹೆ. | 8. ಒಂದನೇ ವರ್ಷದ ನೆಡುತೋಪು ಪೋಷಣೆ | 315800.00 | |
| 4. | ಕೆ.ಎಸ್.ಎಫ್.ಎಂ.ಬಿ.ಸಿ. ಮಾದರಿ–05 | 100 ಹೆ. | 1. ನೆಡುತೋಪು ಬೆಳೆಸುವುದು | 387596.00 | |
| | | 25 ಹೆ. | 1. ಮುಂಗಡ ಕಾಮಗಾರಿಯಲ್ಲಿ ಜಾನುವಾರು ನಿರೋಧಕ ಕಂದಕ ತೆಗೆಯುವುದು 1800 ಸಿಎಂಟಿಆರ್ | 91026.00 | |
| | | | 2. ಗುಂಡಿಗಳನ್ನು ತೆಗೆಯುವುದು 1.00x1.00x1.00 =1ಮೀಟರ್2500ಗುಂಡಿಗಳು 2500ಸಿ.ಎಂ.ಟಿ.ಆರ್. | 126425.00 | |
| | | | 3. 14x20 ಗಾತ್ರದ 2750 ಸಸಿಗಳನ್ನು ಬೆಳೆಸುವುದು | 63250.00 | |
| | | | 4. ಭೂ ಮತ್ತು ಜಲ ಸಂರಕ್ಷಣಾ ಕಾಮಗಾರಿ | 103750.00 | |
| | | 50 ಹೆ. | 5. ಒಂದನೇ ವರ್ಷದ ನೆಡುತೋಪು ಪೋಷಣೆ | 165600.00 | |
| 5 | ಪರಿಹಾರಾತ್ಮಕ ಹಸಿರೀಕರಣ | 50 ಹೆ. | 1. ನೆಡುತೋಪು ಬೆಳೆಸುವುದು | 119222.00 | |
| 6 | ಡಿ.ಡಿ.ಎಫ್. | 15 ಹೆ. | 1. ನೆಡುತೋಪು ಬೆಳೆಸುವುದು | 45300.00 | |
| | | 32 ಹೆ. | 1. ಮುಂಗಡ ಕೆಲಸದಲ್ಲಿ ಜಾನುವಾರು ನಿರೋಧಕ ಕಂದಕ ತೆಗೆಯುವುದು 1760 ಸಿಎಂಟಿಆರ್ | 89003.00 | |
| | | | 2. ರಿಪ್ಪಿಂಗ್ 55040 ಆರ್.ಎಂ.ಟಿ.ಅರ್ | 172800.00 | |
| | | | 3. ಸಸಿ ಬೆಳೆಸುವುದು 8x12 3840 ಸಸಿಗಳು | 25728.00 | |
| | | | 4. 5x8 ಗಾತ್ರದ 46080 ಸಾವಿರ ಸಸಿಗಳನ್ನು ಬೆಳೆಸುವುದು | 92160.00 | |
| | | | 5. 3200 ಗುಂಡಿಗಳನ್ನು ತೆಗೆಯುವುದು | 34954.00 | |
| 7 | 12ನೇ ಹಣಕಾಸು | 15 ಹೆ. | 1. ಎರಡನೇ ವರ್ಷದ ನೆಡುತೋಪು ಪೋಷಣೆ | 39100.00 | |
| | | 20 ಹೆ. | 2. ಒಂದನೇ ವರ್ಷದ ನೆಡುತೋಪು ಪೋಷಣೆ | 84300.00 | |
| | ಒಟ್ಟು | | | **7942997.00** | **158900.00** |

ಯುನಿಟ್ – 4

| ಕ್ರ. ಸಂ. | ಯೋಜನೆ | ವಿಸ್ತೀರ್ಣ | ಕಾಮಗಾರಿಗಳ ವಿವರ | ಅಂದಾಜು ಮೊತ್ತ ರೂ.ಗಳಲ್ಲಿ | EMD ರೂ.ಗಳಲ್ಲಿ |
|---|---|---|---|---|---|
| 1 | 2 | 3 | 4 | 5 | 6 |
| | ಹೊನ್ನಾಳಿ ವಲಯ | | | | |
| 1 | ಕೆ.ಎಸ್.ಎಫ್.ಎಂ.ಬಿ.ಸಿ. ಮಾದರಿ–01 | 25 ಹೆ.<br>30 ಹೆ. | 1. ಎರಡನೇ ವರ್ಷದ ನೆಡುತೋಪು ಪೋಷಣೆ<br>2. ಒಂದನೇ ವರ್ಷದ ನೆಡುತೋಪು ಪೋಷಣೆ | 3100.00<br>27200.00 | |
| 2 | ಕೆ.ಎಸ್.ಎಫ್.ಎಂ.ಬಿ.ಸಿ. ಮಾದರಿ–02 | 50 ಹೆ. | 1. ಮುಂಗಡ ಕಾಮಗಾರಿಯಲ್ಲಿ ಜಾನುವಾರು ನಿರೋಧಕ ಕಂದಕ ತೆಗೆಯುವುದು 4500 ಸಿಎಂಟಿಆರ್<br>2. ಗುಂಡಿಗಳನ್ನು ತೆಗೆಯುವುದು 0.60x0.60x0.60 ಅಳತೆಯ20000ಗುಂಡಿಗಳು4320 ಸಿ.ಎಂ.ಟಿ.ಆರ್.<br>3. 8x12 ಗಾತ್ರದ 46080 ಸಾವಿರ ಸಸಿಗಳನ್ನು ಬೆಳೆಸುವುದು<br>4. ಭೂ ಮತ್ತು ಜಲ ಸಂರಕ್ಷಣಾ ಕಾಮಗಾರಿ | 227565.00<br>218462.00<br>160800.00<br>159500.00 | |
| 3 | ಡಿ.ಡಿ.ಎಫ್ | 30 ಹೆ.<br>15 ಹೆ. | 1. ಮುಂಗಡ ಕೆಲಸದಲ್ಲಿ ಜಾನುವಾರು ನಿರೋಧಕ ಕಂದಕ ತೆಗೆಯುವುದು 1650 ಸಿಎಂಟಿಆರ್<br>2. 3000 ಗುಂಡಿಗಳನ್ನು ತೆಗೆಯುವುದು<br>3. ರಿಪ್ಪಿಂಗ್ 51600 ಆರ್‌ಎಂಟಿಆರ್<br>4. 8x12 ಗಾತ್ರದ 3600 ಸಸಿಗಳನ್ನು ಬೆಳೆಸುವುದು<br>5. 5x8 ಗಾತ್ರದ 43200 ಸಾವಿರ ಸಸಿಗಳನ್ನು ಬೆಳೆಸುವುದು<br>6. ಎರಡನೇ ವರ್ಷದ ನೆಡುತೋಪು ಪೋಷಣೆ | 83440.00<br>32769.00<br>162024.00<br>24120.00<br>86400.00<br>29300.00 | |
| 4 | ಪರಿಹಾರಾತ್ಮಕ ಹಸಿರೀಕರಣ | 100 ಹೆ. | ನೆಡುತೋಪು ಬೆಳೆಸುವುದು. | 238444.00 | |
| | ಒಟ್ಟು | | | **1453124.00** | **29100.00** |

**ನಿಬಂಧನೆಗಳು :**

1. ಟೆಂಡರ್‌ನಲ್ಲಿ ಭಾಗವಹಿಸುವ ಗುತ್ತಿಗೆದಾರರು 2008–09ನೇ ಸಾಲಿಗೆ ಈ ವಿಭಾಗದಲ್ಲಿ ನೊಂದಾಯಿತ ಗುತ್ತಿಗೆದಾರರಾಗಿರತಕ್ಕದ್ದು.
2. ಟೆಂಡರ್ ದಿನಾಂಕ: 28–8–2008 ರಂದು ಬೆಳಿಗ್ಗೆ 10.00 ಗಂಟೆಯಿಂದ ಮಧ್ಯಾಹ್ನ 1.00 ಗಂಟೆಯವರೆಗೆ ಟೆಂಡರ್ ನಮೂನೆಯನ್ನು ಶುಲ್ಕ ರೂ. 225/– ಗಳನ್ನು ಪಾವತಿಸಿ ಪಡೆಯಬಹುದಾಗಿದೆ.
3. ಟೆಂಡರ್ ನಮೂನೆಯನ್ನು ನಿಗಧಿತ ಇ.ಎಂ.ಡಿ. ಯೊಂದಿಗೆ ಪೂರ್ಣ ಪ್ರಮಾಣದಲ್ಲಿ ಭರ್ತಿ ಮಾಡಿ ಈ ಕಛೇರಿಯಲ್ಲಿನ ಟೆಂಡರ್ ಪಟ್ಟಿಗೆಯಲ್ಲಿ ಟೆಂಡರ್ ದಿವಸದಂದೇ 4.30 ರೊಳಗಾಗಿ ಹಾಕತಕ್ಕದ್ದು.
4. ಟೆಂಡರ್ ನಮೂನೆಯ ಜೊತೆಯಲ್ಲಿ ನಿಗಧಿತ ಇ.ಎಂ.ಡಿ. ಮೊತ್ತವನ್ನು ಡಿ.ಡಿ. ರೂಪದಲ್ಲಿ ಲಗತ್ತಿಸಬೇಕು. ಇಲ್ಲವಾದಲ್ಲಿ ಅಂತಹ ಟೆಂಡರ್‌ನ್ನು ತಿರಸ್ಕರಿಸಲಾಗುವುದು.
5. ದರಗಳನ್ನು ಇಲಾಖಾ ಎಸ್.ಎಸ್.ಆರ್. ದರಗಳಿಗಿಂತ ಶೇಕಡವಾರು ಇಂತಿಷ್ಟು ಹೆಚ್ಚು ಅಥವಾ ಶೇಕಡವಾರು ಇಂತಿಷ್ಟು ಕಡಿಮೆ ಎಂದು ಸ್ಪಷ್ಟವಾಗಿ ನಮೂದಿಸತಕ್ಕದ್ದು.
6. ಕಾಮಗಾರಿಗಳನ್ನು ಸಮರ್ಪಕವಾಗಿ ಪೂರ್ಣಗೊಳಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿಗಳು, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಅಥವಾ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರಿಂದ ತಪಾಸಣೆಯನ್ನು ಕಡ್ಡಾಯವಾಗಿ ಮಾಡಿಸತಕ್ಕದ್ದು.
7. ಆಯಾಯ ಯೋಜನೆಯಡಿಯಲ್ಲಿನ ಕಾಮಗಾರಿಗಳನ್ನು ನಿಗಧಿತ ಅವಧಿಯೊಳಗೆ ಅಂದರೆ 31–3–2009 ಕ್ಕೆ ಪೂರ್ಣಗೊಳಿಸತಕ್ಕದ್ದು ಮತ್ತು ಹಣ ಪಾವತಿಗೆ ಆಯಾಯ ಶೀರ್ಷಿಕೆಯಡಿ ಹಣ ಬಿಡುಗಡೆಯಾದ ನಂತರವೇ ಈ ಕಛೇರಿಯಿಂದ ಪಾವತಿಸಲು ಕ್ರಮ ಕೈಗೊಳ್ಳಲಾಗುವುದು.

8. ಮೇಲಿನ ಎಲ್ಲಾ ಕಾಮಗಾರಿಗಳು ಋತುಕಾಲೀನ ಕಾಮಗಾರಿಗಳಾಗಿದ್ದು ಕಾಲ ಕಾಲಕ್ಕನುಗುಣವಾಗಿ ಮಾಡಬೇಕಾದ ಕಾಮಗಾರಿಗಳನ್ನು ಆಯಾಯ ಕಾಲಮಿತಿಯಲ್ಲೆ ನಿರ್ವಹಿಸತಕ್ಕದ್ದು ಈ ಬಗ್ಗೆ ಮಾಹಿತಿಯನ್ನು ಸಂಬಂಧಪಟ್ಟ ವಲಯ ಅರಣ್ಯಾಧಿಕಾರಿಗಳಿಂದ ಪಡೆಯತಕ್ಕದ್ದು.
9. ನಿಗಧಿತ ಸಮಯದೊಳಗಾಗಿ ಕಾಮಗಾರಿಗಳನ್ನು ಪೂರ್ಣಗೊಳಿಸದೇ ಇದ್ದಲ್ಲಿ ಭದ್ರತಾ ಠೇವಣಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೆ ಕಾಮಗಾರಿಗಳನ್ನು ಮರು ಟೆಂಡರ್ ಮೂಲಕ ಅಥವಾ ಗುತ್ತಿಗೆ ಆಧಾರದ ಮೇಲೆ ಮಾಡಿಸಲಾಗುವುದು. ಒಂದೊಮ್ಮೆ ವೆಚ್ಚವು ಮಂಜೂರಾದ ಮೊತ್ತಕ್ಕಿಂತ ಹೆಚ್ಚಿಗೆ ಆದಲ್ಲಿ ಮೂಲ ಟೆಂಡರ್ ದಾರರಿಂದ ವಸೂಲಿ ಮಾಡಲಾಗುವುದು. ಉಳಿಕೆ ಅದಲ್ಲಿ ಟೆಂಡರ್‌ದಾರರು ಉಳಿಕೆ ಹಣಕ್ಕೆ ಬಾಧ್ಯಸ್ಥರಾಗಿರುವುದಿಲ್ಲ. ಮತ್ತು ಅಂತಹ ಗುತ್ತಿಗೆದಾರರ ಹೆಸರನ್ನು ಕಪ್ಪು ಪಟ್ಟಿಯಲ್ಲಿ ಸೇರಿಸಲಾಗುವುದು.
10. ಕಾಮಗಾರಿ ನಿರ್ವಹಿಸುವ ಸಮಯದಲ್ಲಿ ಯಾವುದೇ ಗಿಡ ಮರಗಳಿಗೆ ಹಾನಿಯುಂಟಾಗದಂತೆ ಎಚ್ಚರಿಕೆ ವಹಿಸತಕ್ಕದ್ದು.
11. ಟೆಂಡರ್ ಒಪ್ಪಿಗೆಯಾದ ಬಗ್ಗೆ ಯಶಸ್ವಿ ಗುತ್ತಿಗೆದಾರರಿಗೆ ಅಂಚೆ ಮೂಲಕ ತಿಳಿಸಲಾಗುವುದು.
12. ಯಶಸ್ವಿ ಟೆಂಡರ್‌ದಾರರು ಕಾಮಗಾರಿ ಪ್ರಾರಂಭಿಸುವ ಮುನ್ನ ಈ ಕಛೇರಿಯಲ್ಲಿ ಭದ್ರತಾ ಠೇವಣಿಯನ್ನು ಜಮಾ ಮಾಡಿ ಟೆಂಡರ್ ಕರಾರು ಒಪ್ಪಂದ ಮಾಡಿಕೊಂಡು ಕಾರ್ಯದೇಶ ಪಡೆದು ಕಾಮಗಾರಿ ಪ್ರಾರಂಭಿಸತಕ್ಕದ್ದು.
13. ಕಾಮಗಾರಿಯನ್ನು ನಿರ್ವಹಿಸಲು ಯಾವುದೇ ಸಂದರ್ಭದಲ್ಲಿ ಮತ್ತು ಯಾವುದೇ ಕಾರಣಕ್ಕೂ ಮುಂಗಡ ಹಣವನ್ನು ನೀಡಲಾಗುವುದಿಲ್ಲ. ಕಾಮಗಾರಿಯನ್ನು ಪೂರ್ಣಗೊಳಿಸಿದ ನಂತರವೂ ಮೇಲಾಧಿಕಾರಿಗಳಿಂದ ಯಾವುದೇ ಕಾರಣದಿಂದ ಹಣ ಬಿಡುಗಡೆಯಾಗದಿದ್ದ ಪಕ್ಷದಲ್ಲಿ ಹಣ ಬಿಡುಗಡೆಯಾಗುವವರೆಗೆ ಕಾಯತಕ್ಕದ್ದು.
14. ರಿಪ್ಪಿಂಗ್ ಕಾಮಗಾರಿಯನ್ನು ಹೊರತುಪಡಿಸಿ ಗುಂಡಿ ತೆಗೆಯುವುದು. ಜಾನುವಾರು ನಿರೋಧಕ ಕಂದಕ ತೆಗೆಯುವ ಕಾಮಗಾರಿಗಳನ್ನು ಸ್ಥಳೀಯ ಕೂಲಿಗಾರರಿಂದಲೇ ನಿರ್ವಹಿಸತಕ್ಕದ್ದು ಯಾವುದೇ ಸಂದರ್ಭದಲ್ಲಿ ಯಾವುದೇ ಕಾರಣಕ್ಕೂ ಯಂತ್ರಗಳನ್ನು ಬಳಸುವಂತಿಲ್ಲ.
15. ರಿಪ್ಪಿಂಗ್ ಮಾಡಬೇಕಾದ ಆಳ ಕನಿಷ್ಟ 75 ಸೆ.ಮೀ ಮತ್ತು ಅಗಲ ಕನಿಷ್ಟ 45 ಸೆ.ಮೀ.ಗಿಂತ ಕಡಿಮೆ ಇರಕೂಡದು.
16. ಯಾವುದೇ ಕಾರಣದಿಂದ ಮೇಲ್ಕಂಡ ದಿನಾಂಕದಂದು ಟೆಂಡರ್ ಜರುಗದಿದ್ದಲ್ಲಿ ಮರು ಟೆಂಡರ್‌ನ್ನು ಮೇಲಿನ ಷರತ್ತುಗಳಿಗೊಳಪಟ್ಟಂತೆ ದಿನಾಂಕ: 8–9–08 ರಂದು ನಡೆಸಲಾಗುವುದು. ಹಾಗೂ ಸದರಿ ದಿನಾಂಕದಂದು ಟೆಂಡರ್ ಜರುಗದಿದ್ದಲ್ಲಿ ಮರು ಟೆಂಡರನ್ನು ದಿನಾಂಕ: 16–9–2008 ರಂದು (ಮೇಲಿನ ಷರತ್ತುಗಳಗೊಳಪಟ್ಟಂತೆ) ಟೆಂಡರ್ ನಡೆಸಲಾಗುವುದು.
17. ಬುಲ್ಡೋಜರ್ ಸಾಗಾಣಿಕೆಗಾಗಿ ಪ್ರತ್ಯೇಕ ವೆಚ್ಚವನ್ನು ನೀಡಲಾಗುವುದಿಲ್ಲ.
18. ಭದ್ರತಾ ಠೇವಣಿಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ದಾವಣಗೆರೆ ವಿಭಾಗ, ದಾವಣಗೆರೆ (Deputy Conservator of Forests, Davangere Division) ಇವರ ಪದನಾಮಕ್ಕೆ ತೆಗೆಯಿಸಿ ದಾವಣಗೆರೆಯಲ್ಲಿ ಪಾವತಿಯಾಗುವಂತೆ ಇರತಕ್ಕದ್ದು.
19. ಷೆಡ್ಯೂಲ್‌ನಲ್ಲಿ ತಿಳಿಸಿರುವ ಪ್ರಮಾಣಗಳು ಅಂದಾಜು ಪ್ರಮಾಣಗಳಾಗಿದ್ದು ಹೆಚ್ಚು ಅಥವಾ ಕಡಿಮೆಯಾಗುವ ಸಾಧ್ಯತೆಗಳಿದ್ದು ಇದಕ್ಕೆ ಬದ್ದರಾಗಿರತಕ್ಕದ್ದು.
20. ಕಾಮಗಾರಿಗಳನ್ನು ತೃಪ್ತಿಕರವಾಗಿ ನಿಗಧಿತ ಸಮಯದೊಳಗಾಗಿ ಪೂರ್ಣಗೊಳಿಸಿದ ಬಗ್ಗೆ ಸಂಬಂಧಿಸಿದ ವಲಯ ಅರಣ್ಯಾಧಿಕಾರಿಗಳಿಂದ ಪ್ರಮಾಣ ಪತ್ರವನ್ನು ಹಾಜರು ಪಡಿಸಿದ ನಂತರವೇ ಭದ್ರತಾ ಠೇವಣಿಯನ್ನು ಹಿಂತಿರುಗಿಸಲು ಕ್ರಮ ಕೈಗೊಳ್ಳಲಾಗುವುದು.
21. ಯಾವುದೇ ಸಂದರ್ಭದಲ್ಲಿ ಟೆಂಡರ್‌ನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಥವಾ ಟೆಂಡರ್‌ನ್ನು ರದ್ದುಗೊಳಿಸುವ ಇಲ್ಲವೇ ಮುಂದೂಡುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿರವರು ಹೊಂದಿರುತ್ತಾರೆ.
22. ಪ್ರತಿ ಯೂನಿಟಿಗೆ ಟೆಂಡರ್ ನಮೂನೆಗಳನ್ನು ಪ್ರತ್ಯೇಕವಾಗಿ ಸಲ್ಲಿಸುವುದು.
23. ಕಾಮಗಾರಿ ನಿರ್ವಹಿಸುವಲ್ಲಿ ಏನಾದರೂ ಸಮಸ್ಯೆ ಉದ್ಭವಿಸಿದಲ್ಲಿ ಅರಣ್ಯ ಸಂರಕ್ಷಣಾಧಿಕಾರಿಗಳು, ಬಳ್ಳಾರಿ ವೃತ್ತ, ಬಳ್ಳಾರಿ ರವರ ತೀರ್ಮಾನವೇ ಅಂತಿಮವಾಗಿದ್ದು, ಇದಕ್ಕೆ ಬದ್ದರಾಗಿತಕ್ಕದ್ದು.
24. ಇನ್ನೂ ವಿವರವಾದ ಷರತ್ತುಗಳಿಗಾಗಿ / ಹೆಚ್ಚಿನ ವಿವರಗಳಿಗಾಗಿ ಈ ಕಾರ್ಯಾಲಯದಲ್ಲಿ ಕೆಲಸದ ದಿವಸಗಳಲ್ಲಿ ಕಛೇರಿಯ ವೇಳೆಯಲ್ಲಿ ಪಡೆಯಬಹುದಾಗಿದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ದಾವಣಗೆರೆ ವಿಭಾಗ, ದಾವಣಗೆರೆ.

ಪಿ.ಆರ್. 432